


# ಜ್ಯೋತಿಷ ಮಿತ್ರ

ಆನ್ಲೈನ್ ದಿನಪತ್ರಿಕೆ

॥ ವೇದೋಽಖಿಲೋ ಧರ್ಮಮೂಲಮ್ ॥

www.jyothishamithra.com

ಸಂಚಿಕೆ : 902 03-02-2021 ಬುಧವಾರ

ಶಾರ್ವರಿಸಂವತ್ಸರ ಉತ್ತರಾಯಣ ಹೇಮಂತಋತು ಪೌಷಮಾಸ ಕೃಷ್ಣಪಕ್ಷ

## ನಿತ್ಯ ಪಂಚಾಂಗ

ತಿಥಿ : ಷಷ್ಠಿ (ಗಂಟೆ 14.11ರ ವರೆಗೆ)

ನಕ್ಷತ್ರ : ಚಿತ್ರಾ (ಗಂಟೆ 21.06ರ ವರೆಗೆ)

ರಾಹುಕಾಲ : (ಗಂಟೆ 12.44 PM - 02.11 PM ವರೆಗೆ)

ಗುಳಿಕಕಾಲ : (ಗಂಟೆ 11.17 AM - 12.44 PM ವರೆಗೆ)

## ಸುಜ್ಞಾನ

ಜೀವನದಲ್ಲಿ ಎಲ್ಲರಿಗೂ ಗೆಲ್ಲಬೇಕೆಂಬ ಬಯಕೆ ಇದ್ದೇ ಇರುತ್ತದೆ. ಎಲ್ಲಿ ತಪ್ಪಿದೆವು ಎಂದು ಅವಲೋಕಿಸಬೇಕು. ದಾರಿಯನ್ನು ಸರಿಪಡಿಸಿಕೊಂಡು ದಿಟ್ಟ ಗುರಿಯೊಂದಿಗೆ ಮುನ್ನಡೆಯಬೇಕು. ಏಕೆಂದರೆ.... ' ಭರವಸೆಯೇ ಬದುಕು '

# ಆಧ್ಯಾತ್ಮ

ಜ್ಞಾನವು ಹೊರಗಿನಿಂದ ಹರಿದು ಬರುತ್ತಿಲ್ಲ. ಅದು ನಮ್ಮಲ್ಲೇ ಇದೆ. ಪ್ರತಿಯೊಂದು ಜೀವಿಯೂ ಪರಿಪೂರ್ಣವಾಗಿಯೇ ಹುಟ್ಟುತ್ತದೆ. ಆದರೆ ಕಾಲ ಮತ್ತು ದೇಶಗಳೆಂಬ ಮಾಯೆಯ ಹಿಡಿತದಲ್ಲಿ ಅಜ್ಞಾನಕ್ಕೆ ಒಳಪಡುವ ಜೀವಿಗೆ ತನ್ನ ಪರಿಪೂರ್ಣತೆಯ ಅನುಭವ ಉಂಟಾಗುವುದಿಲ್ಲ ಎನ್ನುವ ವಾದವೂ ಇದೆ. ಎರಡೂ



ವಾದಗಳಲ್ಲಿ ಅಲ್ಪ ಭಿನ್ನತೆ ಕಂಡು ಬಂದರೂ ಜ್ಞಾನದ

ಮೂಲ ಅನಂತ ಸ್ವರೂಪನಾದ ಪರಮಾತ್ಮನೇ ಎಂದು ಎರಡೂ ವಾದಗಳೂ ಒಪ್ಪಿಕೊಂಡಿರುವುದರಿಂದ ಅಲ್ಲಿ ವಿವಾದಕ್ಕೆ ಅವಕಾಶವಿಲ್ಲ. ಜೀವಾತ್ಮ ಹಾಗೂ ಪರಮಾತ್ಮ ಎರಡೂ ಒಂದೇ ಎಂದು ತಿಳಿದು ಕೊಂಡಾತನಿಗೆ ಜ್ಞಾನ ಆತನೊಳಗಿನಿಂದಲೇ ಅಭಿವ್ಯಕ್ತಕೊಂಡ ಅನುಭವವಾಗುವುದು. ನೀನೇ ಸರ್ವಸ್ವ. ನಾನು ಕೇವಲ ನಿನ್ನ ಸೇವಕ ಮಾತ್ರ ಎಂದು ಪರಮಾತ್ಮನಿಗೆ ಶರಣಾಗುವವನಿಗೆ ಜ್ಞಾನ ಹೊರಗಿನಿಂದ ಬಂದಂತೆ ಭಾಸವಾಗುವುದು. ದೇವರನ್ನು ಅನಂತ ಎಂದು ಒಪ್ಪಿಕೊಂಡಾಗ ಅಣು(Micro) ರೇಣು(Macro) ಎನ್ನುವ ವ್ಯತ್ಯಾಸ ಗುರುತಿಸುವುದು ಸಾಧ್ಯವಾಗುವುದಿಲ್ಲ. ದೊಡ್ಡ ಸೊನ್ನೆಯು ಚಿಕ್ಕ ಸೊನ್ನೆಯೂ ಒಂದೇ ಮೌಲ್ಯವನ್ನು ಕೊಡುತ್ತದೆ.




ದಾಂಪತ್ಯ ಜೀವನ ಹಲವು ರೀತಿಯಲ್ಲಿ ಪ್ರಶ್ನಾವಳಿಯಲ್ಲಿರುತ್ತದೆ. ಇದರಂತೆ ದಾಂಪತ್ಯ ಮಾಡುವ, ಮಾಡುತ್ತಿರುವ ಅಥವಾ ವಿವಾಹ ಜೀವನ ಆರಂಭಿಸಿದ ದಿನದಿಂದ ಅನೇಕ ರೀತಿ ತೊಂದರೆ ಆರಂಭವಾಗುತ್ತದೆ. ಅದು ಅತ್ತೆಯರಿಂದ ಅಂದರೆ ಪತ್ನಿಯ ತಾಯಿಯಿಂದ ಪತಿಗೂ, ಪತಿಯ ತಾಯಿಯಿಂದ ಪತ್ನಿಗೂ ಕಿರುಕುಳಗಳು, ಕುಟುಂಬದ ಇತರ ಸದಸ್ಯರಿಂದ ಪತಿಯ ಮನೆಯವರ ಸ್ವಭಾವ, ಊಟ,

ಆಹಾರ ವ್ಯತ್ಯಾಸದಿಂದ ಪತಿಯ ಜಿಪುಣತನ ಅಥವಾ ಪತ್ನಿಗೆ ವೈಭವಯುತ ಜೀವನ ನಡೆಸುವಲ್ಲಿ ಅಡ್ಡಿ, ಅವರಿಗೆ ರೂಪವಂತ ಪತಿ ಅಥವಾ ಪತ್ನಿ ದೊರೆಯಲಿಲ್ಲವೆಂಬ ಕಾರಣ, ಶಯನ ಸುಖ ಕೊಡುತ್ತಿಲ್ಲವೆಂಬ ಕಾರಣ... ಪತಿಯು ಕುಡುಕನಾಗಿ ರುವುದು, ಪತಿಯು ತನ್ನ ಉದ್ಯಮದಲ್ಲಿ ಅಪಾರ ನಷ್ಟ ಹೊಂದಿದಾಗ ಅವರ ಕಷ್ಟ ತಿಳಿಯದೆ ವಿರಸ ಬೆಳೆಸಿ, ಬಿಟ್ಟು ಹೋಗುವುದು. ಅನ್ಯ ಸ್ತ್ರೀ-ಪುರುಷರಲ್ಲಿ ಪ್ರೇಮ, ಅನೈತಿಕ ಸಂಬಂಧ ಬೆಳೆಸುವುದು, ಸಂತಾನವಿಲ್ಲವೆಂದು ಬಿರುಕುಂಟಾಗಿ ಜೀವನವೇ ಪ್ರಶ್ನಾವಳಿಯಲ್ಲಿರುತ್ತದೆ.

ಈ ರೀತಿಯ ಹಲವು ಪ್ರಶ್ನೆಗಳು ನಮ್ಮ ದಾಂಪತ್ಯ ಜೀವನದಲ್ಲಿ ಬರುತ್ತದೆ. ನಮ್ಮ ಜ್ಯೋತಿಷ್ಯ ಶಾಸ್ತ್ರವು ಪತಿಯಾಗಲೀ, ಪತ್ನಿಯಾಗಲೀ ಅವರ ಗುಣ-ಸ್ವಭಾವ, ಕುಟುಂಬದ ಸೌಖ್ಯ, ಶಯನ ಸುಖ.... ಈ ರೀತಿ ಹಲವು ವಿಷಯಗಳನ್ನು ತಿಳಿಸುತ್ತದೆ.

ಯಾವುದೇ ಜಾತಕದಲ್ಲಿ ಲಗ್ನ, ಶುಕ್ರ, ಚಂದ್ರ ಬಲಿಷ್ಠರಾಗಿದ್ದರೆ ಅವರ ವೈವಾಹಿತ ಜೀವನ ಆನಂದಮಯವಾಗಿರುತ್ತದೆ.

## ಲಗ್ನ

ನಿಮ್ಮ ಜಾತಕದ 12 ರಾಶಿಗಳಲ್ಲಿ ಒಂದು ರಾಶಿಯೇ ನಿಮ್ಮ ಲಗ್ನವಾಗಿರುತ್ತದೆ. ಇದು ಚೆನ್ನಾಗಿದ್ದರೆ, ಅಂದರೆ ಇತರ ಪಾಪ ಗ್ರಹಗಳಿಂದ ಪೀಡಿಸಲ್ಪಡದಿದ್ದರೆ ನೀವು ಆರೋಗ್ಯ ಆಗಿರುತ್ತೀರಿ. ನಿಮ್ಮ ಸ್ವಭಾವ, ಗುಣ, ರೂಪ, ಲಕ್ಷಣ, ದೈಹಿಕ ಸಾಮರ್ಥ್ಯದಿಂದಿರುತ್ತೀರಿ. ಇದರಲ್ಲಿ ಪಾಪಗ್ರಹ ಸ್ಥಿತ ಅಥವಾ ದೃಷ್ಟಿಸಿದರೆ ನಿಮ್ಮ ಗುಣ, ಹವ್ಯಾಸ, ಸ್ವಭಾವ ಆರೋಗ್ಯದಲ್ಲಿ ವ್ಯತ್ಯಾಸವಾಗಿ, ಅದು ನಿಮ್ಮ ವೈವಾಹಿಕ ಜೀವನದ ಮೇಲೆ ಕ್ರೂರ ಪರಿಣಾಮ ಬೀರುತ್ತದೆ.

ಈ ಲಗ್ನದ ಮೇಲೆ ಕುಜನ ಪ್ರಭಾವವಿದ್ದರೆ - ನಿಮಗೆ ಶೀಘ್ರ ಕೋಪ, ಪ್ರತೀ ವಿಷಯಕ್ಕೂ, ಮಾತಿಗೂ ಹಿಂದೆ-ಮುಂದೆ ನೋಡದೆ ದುಡುಕುವುದು, ನಾಲಿಗೆ ಬಿಗಿಯಿಲ್ಲದೆ ಮಾತನಾಡುವುದು. ಮೊದಲು ಕೆಲಸ ಮಾಡಿ ಅನಂತರ ಯೋಚಿಸುವ ಗುಣ, ಕ್ರೂರ ಗುಣ, ದೈಹಿಕವಾಗಿ ದಂಡಿಸುವ ಗುಣವಿರುತ್ತದೆ. ಶನಿಯ ಪ್ರಭಾವ ಲಗ್ನದ ಮೇಲಿದ್ದರೆ – ಒಳಗೆ ಮತ್ಸರದ ಸ್ವಭಾವವಿಟ್ಟುಕೊಂಡು ಹಗೆ ಸಾಧಿಸುವುದು. ಆದಷ್ಟೂ ಸಹನೆಯಿಂದ ಇರುತ್ತಾರೆ. ಆದರೆ ಒಂದು ಸಲ ಸಹನೆ ತಪ್ಪಿದರೆ ಆ ಕೆಲಸ ಪೂರ್ತಿ ಮುಗಿಸುವವರೆಗೂ ಬಿಡುವುದಿಲ್ಲ. ಕುಜನ ಗುಣಕ್ಕೆ ಪೂರ್ತಿ ವಿರುದ್ಧ ಗುಣ, ಸೂರ್ಯನ ಪ್ರಭಾವವಿದ್ದರೆ - ಸ್ವಾಭಿಮಾನ ಹೆಚ್ಚು ಅಧಿಕಾರಯುತ ರಾಗಿರುತ್ತಾರೆ. ಬೇಗ ಯಾವುದನ್ನೂ ಒಪ್ಪಿಕೊಳ್ಳುವುದು ಇಲ್ಲ. ಯಾರಿಗೂ ತಲೆ ಬಾಗುವುದಿಲ್ಲ. ಆದ್ದರಿಂದ ಪತ್ನಿಯ ಜಾತಕದಲ್ಲಿ ಲಗ್ನದಲ್ಲಿ ಸೂರ್ಯ ಇದ್ದರೆ -

ಪತಿಯ ಮಾತಿಗೆ ತಲೆ ಬಾಗುವುದಿಲ್ಲ. ಪತಿಯ ಲಗ್ನದಲ್ಲಿ ಸ್ಥಿತರಾದರೆ - ಪತಿಯು ಪತ್ನಿಯನ್ನು ತನ್ನ ಗುಲಾಮರಂತೆ ನೋಡುತ್ತಾರೆ. ಅಧಿಕಾರ ಚಲಾಯಿಸುತ್ತಾರೆ.

ಆದ್ದರಿಂದ ಈ ಕುಜ, ಸೂರ್ಯ, ಶನಿಯ ಪ್ರಭಾವ ಲಗ್ನದ ಮೇಲೆ ಅಥವಾ ಸಪ್ತಮದ ಮೇಲೆ ಬಿದ್ದರೆ ಅವರ ವೈವಾಹಿಕ ಜೀವನ ಸದಾ ಕಲಹ, ಅಧಿಕಾರಯುತ ಹಠದಿಂದ ಕೂಡಿರುತ್ತದೆ. ಆಗ ವೈವಾಹಿಕ ಜೀವನದಲ್ಲಿ ಸುಖ-ಶಾಂತಿ ಎಲ್ಲಿಯದು ? ಒಬ್ಬರ ಜಾತಕದಲ್ಲಿ ಲಗ್ನದಲ್ಲಿ ಕುಜ, ಅಥವಾ ಸೂರ್ಯಸ್ಥಿತರಾಗಿ ಮತ್ತೊಬ್ಬರ ಜಾತಕದಲ್ಲಿ ಶನಿ ಅಥವಾ ರಾಹು ಸ್ಥಿತರಾದರೆ ಅವರ ವೈವಾಹಿತ ಜೀವನ ನೆಮ್ಮದಿಯಿಂದ ಇರುವುದಿಲ್ಲ.

ಲಗ್ನದಲ್ಲಿ ಅಥವಾ ಸಪ್ತಮದಲ್ಲಿ ಪಾಪಗ್ರಹವಿದ್ದು ಅವರ ಪತಿ ಅಥವಾ ಪತ್ನಿಯ ಜಾತಕದಲ್ಲಿ ಅವರ ಲಗ್ನ ಅಥವಾ ಸಪ್ತಮದಲ್ಲಿಯೂ ಪಾಪಗ್ರಹ ಮತ್ತು ಶತೃಗ್ರಹವಿದ್ದರೆ – ಖಂಡಿತವಾಗಿಯೂ ಆ ಪತಿ - ಪತ್ನಿಯ ವೈವಾಹಿಕ ಜೀವನ ಪ್ರಶ್ನಾವಳಿಯಲ್ಲಿರುತ್ತದೆ.

## ಚಂದ್ರ

ಚಂದ್ರ ಇಬ್ಬರ ಜಾತಕದಲ್ಲೂ ಮಿತ್ರ ಕ್ಷೇತ್ರದಲ್ಲಿದ್ದರೆ – ರಾಶಿ ಕೂಟ ಚೆನ್ನಾಗಿದ್ದು, ಅವರ ಮನಸ್ಸು ಮಿತ್ರತ್ವದಿಂದಿರುತ್ತದೆ. ಒಂದು ವೇಳೆ ಒಬ್ಬರ ಚಂದ್ರ ನಿಂತ ರಾಶ್ಯಾಧಿಪತಿಗೆ ಮತ್ತೊಬ್ಬರ ಜಾತಕದ ಚಂದ್ರನಿಂತ ರಾಶ್ಯಾಧಿಪತಿ ಮಿತ್ರನಲ್ಲದೆ ಪ್ರಬಲ ಶತೃವಾದರೆ – ಅವರ ಮನಸ್ಸು ಶತ್ರುಗತವಾಗಿರುತ್ತದೆ. ಆದ್ದರಿಂದ ಸಾಲಾವಳಿಯನ್ನು ನೋಡುವಾಗ ರಾಶಿ ಮೈತ್ರಿ ಚೆನ್ನಾಗಿರಬೇಕು.

ಇಬ್ಬರ ಜಾತಕದಲ್ಲೂ ಚಂದ್ರನಿಂದ ರಾಶಿಗಳ ಅಧಿಪರು ಮಿತ್ರರಾಗಿದ್ದರೆ – ಜಾತಕದಲ್ಲಿ ಎಷ್ಟೇ ಕಳತ್ರದೋಷವಿದ್ದರೂ, ಅವರಿಬ್ಬರ ಲಗ್ನದಲ್ಲಿ, ಸಪ್ತಮದಲ್ಲಿ ಪಾಪಗ್ರಹಗಳು ಅಥವಾ ಶತ್ರುಗ್ರಹಗಳು ಸ್ಥಿತರಾದರೂ ಸಹ ಮೇಲ್ನೋಟಕ್ಕೆ ಶತ್ರುಗಳಂತೆ ವರ್ತಿಸಿದರೂ ಕಲಹಗಳಾಗುತ್ತಿದ್ದರೂ ಸಹ ಒಬ್ಬರಿಗೊಬ್ಬರೂ ಮಿತ್ರರಾಗಿ ಅನುಸರಿಸಿಕೊಂಡು

ಹೋಗುತ್ತಾರೆ.



ಕೆಲವು ಸಲ ಪತಿ/ಪತ್ನಿಯ ಜಾತಕಗಳಲ್ಲಿ ವಿಚ್ಛೇದನ ಅಥವಾ ವಿರಸ ಯೋಗವಿದ್ದರೂ ಸಹ ಈ ರೀತಿ ಗ್ರಹ ಮೈತ್ರಿ ಇದ್ದರೆ, ಅವರು ಒಬ್ಬರನ್ನೊಬ್ಬರು ಅರ್ಥ ಮಾಡಿಕೊಂಡು ಸುಖ ವೈವಾಹಿಕ ಜೀವನ ನಡೆಸುತ್ತಾರೆ. ಆದರೆ ಚಂದ್ರನಿಗೆ ಪೀಡಿತ ಶನಿ, ರಾಹು, ಕೇತು, ಕುಜ ದೃಷ್ಟಿ ಇದ್ದರೆ ಮಾನಸಿಕವಾಗಿ ಅಸಮತೋಲನಪಟ್ಟು ವೈವಾಹಿಕ ಜೀವನವೇ ಪ್ರಶ್ನಾವಳಿಯಲ್ಲಿರುತ್ತದೆ.

# ಶುಕ್ರ

ಶುಕ್ರನು ಕಳತ್ರ ಕಾರಕನಾಗುತ್ತಾನೆ. ಯಾವುದೇ ಜಾತಕದಲ್ಲಿ ಶುಕ್ರ ಬಲಾಢ್ಯನಾಗಿ ಯಾವುದೇ ಪಾಪಗ್ರಹಗಳ ಸಂಬಂಧವೂ ಪಡೆಯದೆ ಶುಭ ಸ್ಥಾನಗಳಲ್ಲಿ ಬಲಿಷ್ಠನಾಗಿದ್ದರೆ – ಅವರ ವೈವಾಹಿಕ ಜೀವನ ಉಲ್ಲಾಸಮಯವಾಗಿದ್ದು, ಸುಖ-ಸಂತೋಷದಿಂದ ಜೀವನ ನಡೆಸುತ್ತಾರೆ. ಶುಕ್ರನಿಗೆ ದುಃಸ್ಥಾನದಲ್ಲಿ ಪಾಪ ಗ್ರಹಗಳಿದ್ದರೆ ಅಥವಾ ಶುಕ್ರನಿಗೆ ಕೋನದಲ್ಲಿ ಕೇತುವಿದ್ದರೆ – ವೈವಾಹಿಕ ಜೀವನದಲ್ಲಿ ತೊಂದರೆ ಇರುತ್ತದೆ.

ಶುಕ್ರ – ಜಲತತ್ವ ಗ್ರಹವಾಗಿದ್ದು ಜಾತಕದಲ್ಲಿ ಶುಕ್ರ ಜಲತತ್ವದ ರಾಶಿಯಲ್ಲಿ ಸ್ಥಿತನಾದರೆ – ವೈವಾಹಿಕ ಜೀವನದ ಕಾಲಾವಧಿ ಹೆಚ್ಚಾಗಿದ್ದು, ಸ್ವಲ್ಪ ಕಲಹಗಳಿಂದ ಕೂಡಿರುತ್ತದೆ. ಅಂದರೆ ಶೀಘ್ರ ವಿವಾಹವಾಗುವ ಸಂಭವ.

ಶುಕ್ರ ಅಗ್ನಿತತ್ವ ರಾಶಿಯಲ್ಲಿ ಸ್ಥಿತನಾದರೆ – ತನ್ನ ವಿರುದ್ಧದ ತತ್ವದಲ್ಲಿ ಸ್ಥಿತನಾಗಿ ಇರುವುದರಿಂದ ವಿವಾಹ ನಿಧಾನ ಮತ್ತು ಸರ್ವೇಸಾಮಾನ್ಯವಾಗಿ ವೈವಾಹಿಕ ಜೀವನ ಸುಖಮಯವಾಗಿರುತ್ತದೆ.

ಶುಕ್ರನು ಭೂತತ್ವ ರಾಶಿಯಲ್ಲಿ ಸ್ಥಿತನಾದರೆ - ಶೀಘ್ರ ವಿವಾಹ ಅಥವಾ ಪ್ರೇಮ ವಿವಾಹಗಳಾಗುವ ಸಾಧ್ಯತೆ ಹೆಚ್ಚು. ವೈವಾಹಿಕ ಜೀವನ ಬಹಳ ಕಾಲದವರೆಗೂ ನಡೆದರೂ, ಏರಿಳಿತಗಳಿರುತ್ತವೆ.

ಶುಕ್ರನು ವಾಯುತತ್ವ ರಾಶಿಯಲ್ಲಿ ಸ್ಥಿತರಾದರೆ - ಶುಭಫಲ ನೀಡುತ್ತಾನೆ. ಕುಜನ ಸಂಬಂಧವಿದ್ದರೆ - ಹೆಚ್ಚು ಏರಿಳಿತ ಮತ್ತು ಬೇರ್ಪಡುವ ಸಂಭವವಿರುತ್ತದೆ.


ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ


ಗೌರವ ಸಂಪಾದಕರು : ಜೀವನ್ ಉಳ್ಳಾಲ್
ಸಂಪಾದಕರು : ಶ್ರೀಷ ಎಸ್.
ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.
PH : 9986671473 / 9535283535
jmonline@gmail.com www.jyothishamithra.com